RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಆಗಸ್ಟ್ ೮, ೨೦೧೩ (ಶ್ರಾವಣ ೧೭, ಶಕ ವರ್ಷ ೧೯೩೫)<br>Bangalore, Thursday, August 8, 2013 (Shravana 17, Shaka Varsha 1935) | ಸಂಚಿಕೆ ೩೨<br>Issue 32 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ವಿಷಯ:** ದಿ: ಬಿ.ಎಲ್.ಹೊಸಮನಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು ಅವರ ಕುಟುಂಬಕ್ಕೆ ಅಸಾಧಾರಣ ನಿವೃತ್ತಿ ವೇತನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**

1. ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ-1/ಜಿಪಿಸಿಆರ್ 147/11-12, ದಿನಾಂಕ: 26-20-2011.
2. ಪ್ರಧಾನ ಮಹಾಲೇಖಪಾಲರು (ಎ ಅಂಡ್ ಇ) ಕರ್ನಾಟಕ ರವರ ಪತ್ರ ಸಂ:ಪಿ5 ಸೆಲ್/ಆರ್-1/ಡಿ-15563/ 2011-12, 619 ದಿನಾಂಕ: 16-09-2011.

**ಪ್ರಸ್ತಾವನೆ:**

ವಾಣಿಜ್ಯ ತೆರಿಗೆ ಆಯುಕ್ತರು, ಬೆಂಗಳೂರು ಅವರು ದಿ:ಬಿ.ಎಲ್.ಹೊಸಮನಿ, ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರು ಕರ್ತವ್ಯದ ಮೇಲಿದ್ದಾಗಲೇ ಅಪಘಾತದಲ್ಲಿ ಮರಣ ಹೊಂದಿದ ಕಾರಣ ಅವರ ಕುಟುಂಬಕ್ಕೆ ಕರ್ನಾಟಕ ನಾಗರೀಕ ಸೇವಾ (ಅಸಾಧಾರಣ ನಿವೃತ್ತಿ ವೇತನ) ನಿಯಮಾವಳಿ 2003 ರ ನಿಯಮ 9(1) ರನ್ವಯ ಅಸಾಧಾರಣ ಕುಟುಂಬ ನಿವೃತ್ತಿ ವೇತನವನ್ನು ಮಂಜೂರು ಮಾಡುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

ದಿ:ಬಿ.ಎಲ್.ಹೊಸಮನಿ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ಜಾರಿ ವಿಭಾಗ, ಹುಬ್ಬಳ್ಳಿ ಅವರು ತಮ್ಮ ಕರ್ತವ್ಯಕ್ಕೆ ಸಂಬಂಧಪಟ್ಟ ತುರ್ತು ಸಂದೇಶದ ಮೇರೆಗೆ ವಾಣಿಜ್ಯ ತೆರಿಗೆ ಪರಿವೀಕ್ಷಕರು ಲಭ್ಯವಿಲ್ಲದಿದ್ದ ಕಾರಣ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, ಹುಬ್ಬಳ್ಳಿ ಅವರನ್ನು ಸಂಪರ್ಕಿಸಿ ಅವರ ಅನುಮತಿ ಪಡೆದು ತಮ್ಮ ಕಛೇರಿಯ ಪ್ರಥಮ ದರ್ಜೆ ಸಹಾಯಕರಾದ ದಿ:ಅರುಣ ಎಸ್ ಹೊಸಮನಿ ಅವರನ್ನು ತಮ್ಮ ಸಹಾಯಕ್ಕಾಗಿ ಪಡೆದುಕೊಂಡು ದಿನಾಂಕ:03-05-2011 ರಂದು ಬೆಳಿಗ್ಗೆ ಸರ್ಕಾರಿ ವಾಹನದಲ್ಲಿ ಕರ್ತವ್ಯದ ತೆರಳುತ್ತಿದ್ದಾಗ ಅವರ ಕಾರ್ಯವ್ಯಾಪ್ತಿಯ ಕಿರವತ್ತಿಯ ಸಮೀಪ ಟ್ಯಾಂಕರ್ ಲಾರಿಯೊಂದು ಇವರ ವಾಹನಕ್ಕೆ ಬೆಳಿಗ್ಗೆ 11-15 ರ ಸುಮಾರಿನಲ್ಲಿ ಡಿಕ್ಕಿ ಹೊಡೆದು ಸಂಭವಿಸಿದ ಅಪಘಾತದಲ್ಲಿ ಇಬ್ಬರೂ ಮರಣ ಹೊಂದಿದ್ದಾರೆ. ವಾಣಿಜ್ಯ ತೆರಿಗೆ ಆಯುಕ್ತರು ಅವರ ಪ್ರಸ್ತಾವನೆಯೊಡನೆ ಸಲ್ಲಿಸಿದ ಈ ಕೆಳಕಂಡ ದಸ್ತಾವೇಜುಗಳನ್ನು ಪರಿಶೀಲಿಸಲಾಗಿದೆ.

1. ದಿ:ಬಿ.ಎಲ್.ಹೊಸಮನಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಅವರ ಮರಣಕ್ಕೆ ಕಾರಣವಾದ ಕಿರವತ್ತಿ-ಯಲ್ಲಾಪುರ ನಡುವಣ ರಾಷ್ಟ್ರೀಯ ಹೆದ್ದಾರಿ 63 ರಲ್ಲಿ ದಿನಾಂಕ: 03-05-2011 ರಂದು ಸಂಭವಿಸಿದ ಅಪಘಾತದ ಸನ್ನಿವೇಶ/ಸಂದರ್ಭ ಕುರಿತು ಪೋಲಿಸ್ ಇನ್ಸ್‌ಪೆಕ್ಟರ್, ಯಲ್ಲಾಪುರ ಪೋಲೀಸು ಠಾಣೆ ಅವರು ಅಪರಾಧ ಸಂಖ್ಯೆ 72/2011ರಲ್ಲಿ ಸಿದ್ಧಪಡಿಸಿದ ದಿ:03-05-2011 ರ ತನಿಖಾ ವರದಿ.
2. ದಿ:ಬಿ.ಎಲ್.ಹೊಸಮನಿ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಅವರ ಪತ್ನಿ ಶ್ರೀಮತಿ ಶಾಂತ ಬಾಳಪ್ಪ ಹೊಸಮನಿ ಅವರು ಅಸಾಧಾರಣ ನಿವೃತ್ತಿ ವೇತನ ಮಂಜೂರಾತಿ ಕೋರಿ ನಮೂನೆ-ಬಿ ಯಲ್ಲಿ ಸಲ್ಲಿಸಿರುವ ದಿನಾಂಕ:06-06-2011 ರ ಅರ್ಜಿ.
3. ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಯಲ್ಲಾಪುರ, ಉತ್ತರ ಕನ್ನಡ ಜಿಲ್ಲೆ ಅವರು ನೀಡಿರುವ ದಿ:04-05-2011ರ ವೈದ್ಯಕೀಯ ವರದಿ.
4. ಗ್ರಾಮ ಲೆಕ್ಕಾಧಿಕಾರಿ, ಕಿರುವತ್ತಿ, ಯಲ್ಲಾಪುರ ತಾಲ್ಲೂಕು ಅವರು ನೀಡಿದ ದಿ:18-05-2011ರ ಮರಣ ಪ್ರಮಾಣ ಪತ್ರ
5. ತಹಸೀಲ್ದಾರ್, ಗೋಕಾಕ್ ತಾಲ್ಲೂಕು ಅವರು ನೀಡಿದ ದಿನಾಂಕ: 28-06-2011ರ ಮೃತರ ಕುಟುಂಬದ ಜೀವಂತ ಸದಸ್ಯರ ದೃಢೀಕರಣ ಪತ್ರ.

ಮೇಲಿನ ದಾಖಲೆ ಪತ್ರಗಳನ್ನು ಪರಿಶೀಲಿಸಿದ ನಂತರ ವಾಣಿಜ್ಯ ತೆರಿಗೆ ಆಯುಕ್ತರು ವರದಿ ಮಾಡಿರುವಂತೆ ದಿ:ಬಿ.ಎಲ್.ಹೊಸಮನಿ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ಕರ್ತವ್ಯ ನಿರ್ವಹಿಸುತ್ತಿದ್ದಾಗಲೇ ದಿನಾಂಕ:03-05-2011ರಂದು ರಾಷ್ಟ್ರೀಯ ಹೆದ್ದಾರಿ 13ರ ಕಿರುವತ್ತಿ ಸಮೀಪ ಸಂಭವಿಸಿದ

ಅಪಘಾತದಲ್ಲಿ ಮೃತರಾದರೆಂಬ ಅಂಶವನ್ನು ಒಪ್ಪಿಕೊಂಡು ಅವರ ಕುಟುಂಬಕ್ಕೆ ಅಸಾಧಾರಣ ಕುಟುಂಬ ನಿವೃತ್ತಿ ವೇತನವನ್ನು ಮಂಜೂರು ಮಾಡುವ ಕುರಿತು ಈ ಮುಂದಿನಂತೆ ಆದೇಶಿಸುತ್ತದೆ.–

**ಸರ್ಕಾರದ ಆದೇಶ ಸಂಖ್ಯೆ: ಆಇ 285 ವಾತೆಸಿ 2011(1), ಬೆಂಗಳೂರು, ದಿನಾಂಕ: 08ನೇ ಏಪ್ರಿಲ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ಅಸಾಧಾರಣ ನಿವೃತ್ತಿ ವೇತನ) ನಿಯಮಗಳು 2003 ರ ನಿಯಮ 9(1) ರನ್ವಯ ದಿ:ಬಿ.ಎಲ್.ಹೊಸಮನಿ, ಹಿಂದಿನ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರ ಕೊನೆಯ ವೇತನದ ಶೇಕಡ 75 ರಷ್ಟು ಮೊತ್ತವನ್ನು ಅವರ ಪತ್ನಿ ಶ್ರೀಮತಿ ಶಾಂತ ಬಾಳಪ್ಪ ಹೊಸಮನಿ ಅವರಿಗೆ ಅಸಾಧಾರಣ ನಿವೃತ್ತಿ ವೇತನವನ್ನಾಗಿ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಮುಂದುವರೆದಂತೆ ಅದೇ ನಿಯಮಾವಳಿಯ ನಿಯಮ 9(2) ರನ್ವಯ ದಿ:ಬಿ.ಎಲ್.ಹೊಸಮನಿ, ಅವರ 12 ತಿಂಗಳ ಸಂಬಳಕ್ಕೆ ಸಮನಾದ ಮೊತ್ತವನ್ನು ಅವರ ಪತ್ನಿ ಶ್ರೀಮತಿ ಶಾಂತ ಬಾಳಪ್ಪ ಹೊಸಮನಿ ಅವರಿಗೆ ಇಡಗಂಟು ಪರಿಹಾರವನ್ನಾಗಿ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಮೇಲಿನ ಸೌಲಭ್ಯಗಳ ಜೊತೆಗೆ ದಿ:ಬಿ.ಎಲ್.ಹೊಸಮನಿ, ಅವರ ಕುಟುಂಬವು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 293(ಎಫ್) ರನ್ವಯ ಮರಣ ಉಪದಾನಕ್ಕೂ(ಡಿ.ಸಿ.ಆರ್.ಜಿ) ಅರ್ಹವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್.ಚಂದ್ರಶೇಖರಾರಾಧ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2 ಮತ್ತು ಸಮನ್ವಯ).

**P.R. 734**

## ಆರ್ಥಿಕ ಸಚಿವಾಲಯ

**ವಿಷಯ:** ದಿ: ಅರುಣ ಎಸ್. ಹೊಸಮನಿ, ಪ್ರಥಮ ದರ್ಜೆ ಸಹಾಯಕರು ಅವರ ಕುಟುಂಬಕ್ಕೆ ಅಸಾಧಾರಣ ನಿವೃತ್ತಿ ವೇತನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ–1/ಜಿಪಿಸಿಅರ್ 147/11–12, ದಿನಾಂಕ: 26–10–2011.
2. ಪ್ರಧಾನ ಮಹಾಲೇಖಪಾಲರು(ಎ ಅಂಡ್ ಇ) ಕರ್ನಾಟಕ ರವರ ಪತ್ರ ಸಂ:ಪಿ5 ಸೆಲ್/ಅರ್–1/ ಡಿ–15563/2011–12, 619 ದಿನಾಂಕ: 16–09–2011.

**ಪ್ರಸ್ತಾವನೆ:**

ವಾಣಿಜ್ಯ ತೆರಿಗೆ ಆಯುಕ್ತರು, ಬೆಂಗಳೂರು ಅವರು ದಿ: ಅರುಣ ಎಸ್. ಹೊಸಮನಿ, ಪ್ರಥಮ ದರ್ಜೆ ಸಹಾಯಕರು ಕರ್ತವ್ಯದ ಮೇಲಿದ್ದಾಗಲೇ ಅಪಘಾತದಲ್ಲಿ ಮರಣ ಹೊಂದಿದ ಕಾರಣ ಅವರ ಕುಟುಂಬಕ್ಕೆ ಕರ್ನಾಟಕ ನಾಗರೀಕ ಸೇವಾ (ಅಸಾಧಾರಣ ನಿವೃತ್ತಿ ವೇತನ) ನಿಯಮಾವಳಿ 2003 ರ ನಿಯಮ 9(1) ರನ್ವಯ ಅಸಾಧಾರಣ ಕುಟುಂಬ ನಿವೃತ್ತಿ ವೇತನವನ್ನು ಮಂಜೂರು ಮಾಡುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

ದಿ:ಬಿ.ಎಲ್.ಹೊಸಮನಿ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ಜಾರಿ ವಿಭಾಗ, ಹುಬ್ಬಳ್ಳಿ ಅವರು ತಮ್ಮ ಕರ್ತವ್ಯಕ್ಕೆ ಸಂಬಂಧಪಟ್ಟ ತುರ್ತು ಸಂದೇಶದ ಮೇರೆಗೆ ವಾಣಿಜ್ಯ ತೆರಿಗೆ ಪರಿವೀಕ್ಷಕರು ಲಭ್ಯವಿಲ್ಲದಿದ್ದ ಕಾರಣ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, ಹುಬ್ಬಳ್ಳಿ ಅವರನ್ನು ಸಂಪರ್ಕಿಸಿ ಅವರ ಅನುಮತಿ ಪಡೆದು ತಮ್ಮ ಕಛೇರಿಯ ಪ್ರಥಮ ದರ್ಜೆ ಸಹಾಯಕರಾದ ದಿ:ಅರುಣ ಎಸ್ ಹೊಸಮನಿ ಅವರನ್ನು ತಮ್ಮ ಸಹಾಯಕ್ಕಾಗಿ ಪಡೆದುಕೊಂಡು ದಿನಾಂಕ:03–05–2011 ರಂದು ಬೆಳಿಗ್ಗೆ ಸರ್ಕಾರಿ ವಾಹನದಲ್ಲಿ ಕರ್ತವ್ಯದ ತೆರಳುತ್ತಿದ್ದಾಗ ಅವರ ಕಾರ್ಯವ್ಯಾಪ್ತಿಯ ಕಿರವತ್ತಿಯ ಸಮೀಪ ಟ್ಯಾಂಕರ್ ಲಾರಿಯೊಂದು ಇವರ ವಾಹನಕ್ಕೆ ಬೆಳಿಗ್ಗೆ 11–15 ರ ಸುಮಾರಿನಲ್ಲಿ ಡಿಕ್ಕಿ ಹೊಡೆದು ಸಂಭವಿಸಿದ ಅಪಘಾತದಲ್ಲಿ ಇಬ್ಬರೂ ಮರಣ ಹೊಂದಿದ್ದಾರೆ. ವಾಣಿಜ್ಯ ತೆರಿಗೆ ಆಯುಕ್ತರು ಅವರ ಪ್ರಸ್ತಾವನೆಯೊಡನೆ ಸಲ್ಲಿಸಿದ ಈ ಕೆಳಕಂಡ ದಸ್ತಾವೇಜುಗಳನ್ನು ಪರಿಶೀಲಿಸಲಾಗಿದೆ.

1. ದಿ: ಅರುಣ ಎಸ್. ಹೊಸಮನಿ, ಪ್ರಥಮ ದರ್ಜೆ ಸಹಾಯಕರು ಅವರ ಮರಣಕ್ಕೆ ಕಾರಣವಾದ ಕಿರವತ್ತಿ–ಯಲ್ಲಾಪುರ ನಡುವಣ ರಾಷ್ಟ್ರೀಯ ಹೆದ್ದಾರಿ 63 ರಲ್ಲಿ ದಿನಾಂಕ: 03–05–2011 ರಂದು ಸಂಭವಿಸಿದ ಅಪಘಾತದ ಸನ್ನಿವೇಶ/ಸಂದರ್ಭ ಕುರಿತು ಪೋಲಿಸ್ ಇನ್ಸ್‌ಪೆಕ್ಟರ್, ಯಲ್ಲಾಪುರ ಪೋಲೀಸು ಠಾಣೆ ಅವರು ಅಪರಾಧ ಸಂಖ್ಯೆ 72/2011ರಲ್ಲಿ ಸಿದ್ಧಪಡಿಸಿದ ದಿ:03–05–2011 ರ ತನಿಖಾ ವರದಿ.
2. ದಿ: ಅರುಣ ಎಸ್. ಹೊಸಮನಿ, ಪ್ರಥಮ ದರ್ಜೆ ಸಹಾಯಕರು ಅವರ ಪತ್ನಿ ಶ್ರೀಮತಿ ಶಿಲ್ಪ ಅರುಣ ಹೊಸಮನಿ, ಅವರು ಅಸಾಧಾರಣ ನಿವೃತ್ತಿ ವೇತನ ಮಂಜೂರಾತಿ ಕೋರಿ ನಮೂನೆ–ಬಿ ಯಲ್ಲಿ ಸಲ್ಲಿಸಿರುವ ದಿನಾಂಕ:23–06–2011 ರ ಅರ್ಜಿ.
3. ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಯಲ್ಲಾಪುರ, ಉತ್ತರ ಕನ್ನಡ ಜಿಲ್ಲೆ ಅವರು ನೀಡಿರುವ ದಿ: 04–05–2011ರ ವೈದ್ಯಕೀಯ ವರದಿ.
4. ಗ್ರಾಮ ಲೆಕ್ಕಾಧಿಕಾರಿ, ಕಿರುವತ್ತಿ, ಯಲ್ಲಾಪುರ ತಾಲ್ಲೂಕು ಅವರು ನೀಡಿದ ದಿ:09–05–2011ರ ಮರಣ ಪ್ರಮಾಣ ಪತ್ರ
5. ತಹಸೀಲ್ದಾರ್, ಗೋಕಾಕ್ ತಾಲ್ಲೂಕು ಅವರು ನೀಡಿದ ದಿನಾಂಕ: 16–06–2011ರ ಮೃತರ ಕುಟುಂಬದ ಜೀವಂತ ಸದಸ್ಯರ ದೃಢೀಕರಣ ಪತ್ರ.

ಮೇಲಿನ ದಾಖಲೆ ಪತ್ರಗಳನ್ನು ಪರಿಶೀಲಿಸಿದ ನಂತರ ವಾಣಿಜ್ಯ ತೆರಿಗೆ ಆಯುಕ್ತರು ವರದಿ ಮಾಡಿರುವಂತೆ ದಿ:ಅರುಣ ಎಸ್. ಹೊಸಮನಿ, ಪ್ರಥಮ ದರ್ಜೆ ಸಹಾಯಕರ ಪ್ರಕರಣವನ್ನು ಪರಿಶೀಲಿಸಲಾಗಿ ಅವರು ಮೇಲಾಧಿಕಾರಿಗಳ ಸೂಚನೆ ಮೇರೆಗೆ ದಿ:ಬಿ.ಎಲ್.ಹೊಸಮನಿ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರೊಡನೆ ಕರ್ತವ್ಯ ನಿರ್ವಹಿಸುತ್ತಿದ್ದಾಗಲೇ ದಿನಾಂಕ: 03–05–2011ರಂದು ರಾಷ್ಟ್ರೀಯ ಹೆದ್ದಾರಿ 13ರ ಕಿರುವತ್ತಿ ಸಮೀಪ ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂಬ ಅಂಶವನ್ನು ಒಪ್ಪಿಕೊಂಡು ಅವರ ಕುಟುಂಬಕ್ಕೆ ಅಸಾಧಾರಣ ಕುಟುಂಬ ನಿವೃತ್ತಿ ವೇತನವನ್ನು ಮಂಜೂರು ಮಾಡುವ ಕುರಿತು ಈ ಮುಂದಿನಂತೆ ಆದೇಶಿಸುತ್ತದೆ.–

**ಸರ್ಕಾರದ ಆದೇಶ ಸಂಖ್ಯೆ: ಆಇ 285 ವಾತೆಸಿ 2011(2), ಬೆಂಗಳೂರು, ದಿನಾಂಕ: 08ನೇ ಏಪ್ರಿಲ್, 2013**

ಪ್ರಸ್ತಾವನೆಯಲ್ಲಿ ವಿವರಿಸಿದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ಅಸಾಧಾರಣ ನಿವೃತ್ತಿ ವೇತನ) ನಿಯಮಗಳು 2003ರ ನಿಯಮ 9(1) ರನ್ವಯ ದಿ:ಅರುಣ ಎಸ್. ಹೊಸಮನಿ, ಪ್ರಥಮ ದರ್ಜೆ ಸಹಾಯಕರು ಕೊನೆಯ ವೇತನದ ಶೇಕಡ 75 ರಷ್ಟು ಮೊತ್ತವನ್ನು ಅವರ ಪತ್ನಿ ಶ್ರೀಮತಿ ಶಿಲ್ಪ ಅರುಣ ಹೊಸಮನಿ ಅವರಿಗೆ ಅಸಾಧಾರಣ ನಿವೃತ್ತಿ ವೇತನವನ್ನಾಗಿ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಮುಂದುವರೆದಂತೆ ಅದೇ ನಿಯಮಾವಳಿಯ ನಿಯಮ 9(2) ರನ್ವಯ ದಿ: ಅರುಣ ಎಸ್. ಹೊಸಮನಿ, ಅವರ 12 ತಿಂಗಳ ಸಂಬಳಕ್ಕೆ ಸಮನಾದ ಮೊತ್ತವನ್ನು ಅವರ ಪತ್ನಿ ಶ್ರೀಮತಿ ಶಿಲ್ಪ ಅರುಣ ಹೊಸಮನಿ ಅವರಿಗೆ ಇಡಗಂಟು ಪರಿಹಾರವನ್ನಾಗಿ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಮೇಲಿನ ಸೌಲಭ್ಯಗಳ ಜೊತೆಗೆ ದಿ:ಅರುಣ ಎಸ್. ಹೊಸಮನಿ, ಅವರ ಕುಟುಂಬವು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 293(ಎಫ್) ರನ್ವಯ ಮರಣ ಉಪದಾನಕ್ಕೂ(ಡಿ.ಸಿ.ಆರ್.ಜಿ) ಅರ್ಹವಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್.ಚಂದ್ರಶೇಖರಾರಾಧ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2 ಮತ್ತು ಸಮನ್ವಯ).

**P.R. 735**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಕರ್ನಾಟಕ ಅಗತ್ಯ ವಸ್ತುಗಳು (ಸಾವಿಪ) ನಿಯಂತ್ರಣಾ ಆದೇಶ 1992 ಹಾಗೂ ಅಗತ್ಯ ವಸ್ತುಗಳ ಕಾಯ್ದೆ 1955ರಡಿ ವ್ಯವಹರಿಸಲಾಗುತ್ತಿರುವ ಪ್ರಕರಣಗಳ ವಿಚಾರಣೆ ನಡೆಸಲು ಅಧಿಕಾರ ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಆನಾಸ 252 ಇಭತ 2009, ದಿನಾಂಕ: 23-08-2-12.

**ಪ್ರಸ್ತಾವನೆ:**

ಕರ್ನಾಟಕ ಅಗತ್ಯ ವಸ್ತುಗಳು (ಸಾವಿಪ) ನಿಯಂತ್ರಣಾ ಆದೇಶ 1992 ಕ್ಲಾಸ್ 20ರಡಿ ನ್ಯಾಯಬೆಲೆ ಅಂಗಡಿಗಳ ಅಮಾನತ್ತು ಅಥವಾ ರದ್ಧತಿ ಬಗ್ಗೆ ಹಾಗೂ ಅಗತ್ಯ ವಸ್ತುಗಳ ಕಾಯ್ದೆ 1955ರ ಸೆಕ್ಷನ್ 6(ಸಿ)ರಡಿಯಲ್ಲಿ ಸರ್ಕಾರದ ಮುಂದೆ ಸಲ್ಲಿಸಲಾದ ಮೇಲ್ಮನವಿ ಮತ್ತು ಪುನರ್ ಪರಿಶೀಲನಾ ಅರ್ಜಿಗಳ ವಿಚಾರಣೆಯನ್ನು ನಡೆಸುವ ಅಧಿಕಾರವನ್ನು ಮೇಲೆ ಓದಲಾದ (1)ರ ಸರ್ಕಾರದ ಆದೇಶ ದಿನಾಂಕ: 23-08-2012ರಲ್ಲಿ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿತ್ತು. ಸದರಿ ಸರ್ಕಾರಿ ಆದೇಶವನ್ನು ಮಾರ್ಪಾಡು ಮಾಡಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 81 ಇಭತ 2013, ಬೆಂಗಳೂರು, ದಿನಾಂಕ: 14ನೇ ಜೂನ್, 2013**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಅಗತ್ಯ ವಸ್ತುಗಳು (ಸಾವಿಪ) ನಿಯಂತ್ರಣಾ ಆದೇಶ 1992 ಕ್ಲಾಸ್ 20ರಡಿ ನ್ಯಾಯಬೆಲೆ ಅಂಗಡಿಗಳ ಅಮಾನತ್ತು ಅಥವಾ ರದ್ಧತಿ ಬಗ್ಗೆ ಹಾಗೂ ಅಗತ್ಯ ವಸ್ತುಗಳ ಕಾಯ್ದೆ 1955ರ ಸೆಕ್ಷನ್ 6(ಸಿ) ರಡಿಯಲ್ಲಿ ಸರ್ಕಾರದ ಮುಂದೆ ಸಲ್ಲಿಸಲಾದ ಮೇಲ್ಮನವಿ ಮತ್ತು ಪುನರ್ ಪರಿಶೀಲನಾ ಅರ್ಜಿಗಳ ವಿಚಾರಣೆಯನ್ನು ನಡೆಸಲು ಸರ್ಕಾರದ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರಿಗೆ ಮೇಲೆ ಓದಲಾದ (1)ರಂತೆ ನೀಡಲಾದ ಅಧಿಕಾರವನ್ನು ಹಿಂಪಡೆಯಲಾಗಿದೆ. ಇನ್ನು ಮುಂದೆ ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಸಚಿವರು ಅಂತಹ ಪ್ರಕರಣಗಳ ವಿಚಾರಣೆ ಮಾಡುವ ಪ್ರಾಧಿಕಾರವಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಆರ್.ಮಲ್ಲಿಕಾರ್ಜುನಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 736**
**SC - 200**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2012-13ನೇ ಸಾಲಿನಲ್ಲಿ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ 2ನೇ ಕಂತಿನ ಅನುದಾನಕ್ಕನುಗುಣವಾಗಿ ರಾಜ್ಯದ ಪಾಲಿನ ಉಳಿಕೆ ಅನುದಾನವನ್ನು 2013-14ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಹಾಸನ, ಉತ್ತರ ಕನ್ನಡ ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಹಂಚಿಕೆ ಮಾಡಿದ ಅನುದಾನದಿಂದ ಭರಿಸಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್-17014/01/2012-13, ಡಿಆರ್‌ಡಿಎ (ಎಸ್‌ಎಲ್ ನಂ. 10) ದಿನಾಂಕ: 21-05-2012.
2. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ : 07-06-2012 ಮತ್ತು 17-09-2012.
3. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ : 17-09-2012, 11-10-2012, 26-11-2012, 6-12-2012, 12-02-2013, 19-03-2013, 25-03-2013 ಮತ್ತು 28-03-2013.
4. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 6 ಎಸ್‌ಜೆವೈ ಡಿಆರ್‌ಡಿಎ 2012, ಬೆಂಗಳೂರು, ದಿನಾಂಕ : 22-03-2013.
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-17014/11/2012-13, ಡಿಆರ್‌ಡಿಎ (ಎಸ್.ಎಲ್ ನಂ. 41) ದಿನಾಂಕ: 24-08-2012, (ಎಸ್‌ಎಲ್ ನಂ.48) ದಿನಾಂಕ: 15-11-2012, (ಎಸ್‌ಎಲ್ ನಂ. 75) ದಿನಾಂಕ :16-01-2013, (ಎಸ್‌ಎಲ್ ನಂ.109) ದಿನಾಂಕ: 28-02-2013 ಮತ್ತು (ಎಸ್‌ಎಲ್ ನಂ. 126) ದಿನಾಂಕ : 22-03-2013.

**ಪ್ರಸ್ತಾವನೆ :**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತವೆ. 2012–13ನೇ ಸಾಲಿನಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯದ ಎಲ್ಲಾ 30 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿದೆ (1) ಮತ್ತು (5)ರ ದಿನಾಂಕ : 22–03–2013ರ ಪತ್ರಗಳಲ್ಲಿ ಒಂದನೇ ಕಂತಿನ ಅನುದಾನ ರೂ. 10,45,05,000/– ಬಿಡುಗಡೆ ಮಾಡಿದೆ, ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ರೂ. 3,48,35,000/–ಗಳನ್ನು ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯದ 25 ಜಿಲ್ಲಾ ಪಂಚಾಯತ್‌ಗಳಿಗೆ (ಚಿಕ್ಕಬಳ್ಳಾಪುರ, ಚಿಕ್ಕಮಗಳೂರು, ದಾವಣಗೆರೆ, ಕೊಪ್ಪಳ, ಮತ್ತು ಯಾದಗಿರಿ ಹೊರತುಪಡಿಸಿ) 2ನೇ ಕಂತಿನ ಅನುದಾನ ರೂ. 3,87,98,000/– ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ 2ನೇ ಕಂತಿನ ಅನುದಾನ ರೂ. 1,29,32,666/– ಬಿಡುಗಡೆ ಮಾಡಬೇಕಿತ್ತು. ಆದರೆ, 2012–13ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಹಾಸನ, ಉತ್ತರ ಕನ್ನಡ ಮತ್ತು ಉಡುಪಿ ಜಿಲ್ಲಾ ಪಂಚಾಯತ್‌ಗಳಿಗೆ ಒದಗಿಸಿದ ಅನುದಾನ ಕಡಿಮೆಯಿದ್ದ ಕಾರಣ ಲಭ್ಯತೆಗೆ ಅನುಸಾರ ರೂ. 1,16,41,000/– ಬಿಡುಗಡೆ ಮಾಡಲಾಗಿತ್ತು. ಆದಕಾರಣ, ಹಾಸನ ಉತ್ತರ ಕನ್ನಡ ಮತ್ತು ಉಡುಪಿ ಜಿಲ್ಲಾ ಪಂಚಾಯತ್‌ಗಳಿಗೆ 2012–13ನೇ ಸಾಲಿನಲ್ಲಿ ನೀಡಬೇಕಾಗಿದ್ದ ರಾಜ್ಯದ ಪಾಲಿನ 2ನೇ ಕಂತಿನ ಒಟ್ಟಾರೆ ಉಳಿಕೆ ಅನುದಾನ ರೂ. 12,92,000/– (ರೂಪಾಯಿ ಹನ್ನೆರಡು ಲಕ್ಷದ ತೊಂಬತ್ತೆರಡು ಸಾವಿರ ಮಾತ್ರ) ಗಳನ್ನು 2013–14ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಆಯಾಯ ಜಿಲ್ಲಾ ಪಂಚಾಯತ್‌ಗಳಿಗೆ ಹಂಚಿಕೆ ಮಾಡಿರುವ ಅನುದಾನದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 4 ಎಸ್‌ಜಿವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ : 19–06–2013.**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2012–13ನೇ ಸಾಲಿನಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಬಿಡುಗಡೆ ಮಾಡಿದ್ದ 2ನೇ ಕಂತಿನ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲಿನ 2ನೇ ಕಂತಿನ ಉಳಿಕೆ ಅನುದಾನ ರೂ. 12,92,000/– (ರೂಪಾಯಿ ಹನ್ನೆರಡು ಲಕ್ಷದ ತೊಂಬತ್ತೆರಡು ಸಾವಿರ ಮಾತ್ರ) ಗಳನ್ನು 2013–14ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಹಾಸನ, ಉತ್ತರ ಕನ್ನಡ ಮತ್ತು ಉಡುಪಿ ಜಿಲ್ಲಾ ಪಂಚಾಯತ್‌ಗಳಿಗೆ ಒದಗಿಸಿದ ಅನುದಾನದಿಂದ ಭರಿಸಿ ಲಗತ್ತಿಸಿದ ಅನುಬಂಧದಲ್ಲಿ ತೋರಿಸಿರುವಂತೆ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196– ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2013–14 ಲಿಂಕ್ ಕೋಡ್ 2515–00–196–6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ : ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ : 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6)ಯ ಸಂಖ್ಯೆ ಆಇ 172 ವೆಚ್ಚ–6/2011, ದಿನಾಂಕ : 30–03–2011ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) (ಪ್ರ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಸ್ವಉಕಾ)(ಪ್ರ) ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ : ಗ್ರಾಅಪ 234 ಪಿಬಿಎಸ್ 2013, ದಿನಾಂಕ : 10–06–2013ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ॥ ಜೆ. ರವಿಶಂಕರ್**

ನಿರ್ದೇಶಕರು, (ಸ್ವಉಕಾ) (ಪ್ರ),

ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ : 19–06–2013ಕ್ಕೆ ಅನುಬಂಧ

(ರೂ.ಗಳಲ್ಲಿ)

| ಕ್ರ ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2012–13ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಯೋಜನೆಯಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನು ಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾಗಿರುವ ಎರಡನೇ ಕಂತಿನ ಅನುದಾನ | 2012–13ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿರುವ ರಾಜ್ಯದ ಪಾಲಿನ 2ನೇ ಕಂತಿನ ಅನುದಾನ | ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿರುವ ರಾಜ್ಯದ ಪಾಲಿನ ಉಳಿಕೆ ಅನುದಾನ | 2013–14ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಹಂಚಿಕೆ ಮಾಡಿದ ಅನುದಾನ | 2013–14ನೇ ಸಾಲಿನಲ್ಲಿ ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಅನುದಾನ |
|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** |
| 1. | ಹಾಸನ | 410 | 1300ZZ0003 | 16,28,000 | 5,42,000 | 0 | 5,42,000 | 40,00,000 | 5,42,000 |
| 2. | ಉತ್ತರ ಕನ್ನಡ | 416 | 3000ZZ0080 | 29,95,000 | 9,98,000 | 3,21,000 | 6,77,000 | 24,14,000 | 6,77,000 |
| 3. | ಉಡುಪಿ | 457 | 2000ZZ0001 | 12,03,000 | 4,01,000 | 3,28,000 | 73,000 | 22,00,000 | 73,000 |
| ಒಟ್ಟು | | | | **58,26,000** | **19,41,000** | **6,49,000** | **12,92,000** | **86,14,000** | **12,92,000** |

**ಡಾ|| ಜೆ. ರವಿಶಂಕರ್**
ನಿರ್ದೇಶಕರು, (ಸ್ವಉಕಾ) (ಪ್ರ),
ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

P.R. 729
SC - 10

## ತೋಟಗಾರಿಕೆ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ : ತೋಇ 111 ರೇಇವಿ 2011, ಬೆಂಗಳೂರು, ದಿನಾಂಕ : 22–6–2013

ಸರ್ಕಾರದ ಆದೇಶ ಸಂಖ್ಯೆ : ತೋಇ 111 ರೇಇವಿ 2011, ದಿನಾಂಕ : 04–01–2013ರ ಪ್ರಸ್ತಾವನೆಯ 5ನೇ ಕಂಡಿಕೆಯ 2ನೇ ಪಂಕ್ತಿಯಲ್ಲಿ "ರೂ. 8,58,357/– (ರೂ. 7,25,169/– + 1,33,188/–)ಗಳನ್ನು" ಮತ್ತು ಆದೇಶ ಭಾಗದ 2ನೇ ಪಂಕ್ತಿಯಲ್ಲಿ "ರೂ. 8,58,357/– (ರೂ. 7,25,169/– + 1,33,188/–)ಗಳನ್ನು" ಗಳ ಬದಲಾಗಿ ":ರೂ. 7,25,169/– + ಶೇ.6 ರ ಬಡ್ಡಿ ಸೇರಿ ಪೂರ್ಣ ಮೊತ್ತವನ್ನು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಉಮಾವತಿ**
ಪೀಠಾಧಿಕಾರಿ (ಪ್ರಭಾರ),
ತೋಟಗಾರಿಕೆ ಇಲಾಖೆ (ರೇಷ್ಮೆ).

P.R. 730

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅಪೀಲ್ ಸಂಖ್ಯೆ : 918/2008 ಮತ್ತು 1484–1485/2011 (ಜಿಮ್– ಸ್ಲಮ್)– ಶ್ರೀ ಬಿ.ಆರ್. ಮುರಳೀಧರ ಮತ್ತು ಇತರರು ವಿರುದ್ಧ ರಾಜ್ಯ ಸರ್ಕಾರ

**ಓದಲಾಗಿದೆ :**
1. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅಪೀಲ್ ಸಂಖ್ಯೆ 918/2008 ಮತ್ತು 1484–1485/2011 ರಲ್ಲಿಯ ದಿನಾಂಕ : 28–08–2012ರ ತೀರ್ಪು.
2. ಪ್ರಧಾನ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ : 17–09–2012ರಂದು ನಡೆದ ಸಭೆಯ ನಡವಳಿ.
3. ಸರ್ಕಾರದ ಆದೇಶ ಸಂಖ್ಯೆ : ವಇ 47 ಕೊಮಂಲೆ 2012, ದಿನಾಂಕ : 21–09–2012,
4. ಅ.ಸ.ಪ.ಸಂಖ್ಯೆ : ವಇ 47 ಕೊಮಂಇ 2012, ದಿನಾಂಕ : 27–09–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅಪೀಲ್ ಸಂ. 918/2008 ಮತ್ತು 1484–1485/2011, (GM-SLUM) ರಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯವು ಖಾಸಗಿ ಜಮೀನುಗಳನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಕಾಯ್ದೆ ಕಲಂ 17ರ ಅಡಿಯಲ್ಲಿ ಸ್ವಾಧೀನ ಪಡಿಸಿಕೊಂಡ ಸಂದರ್ಭದಲ್ಲಿ ಮಂಡಳಿಯ ಕಾಯ್ದೆ ಕಲಂ 20ರ ಅಡಿಯಲ್ಲಿ ನೀಡುವ ಭೂ ಪರಿಹಾರ ಧನ ಅತಿ ಕಡಿಮೆಯಾಗಿದೆಯೆಂದು, ದಿನಾಂಕ : 20–09–2008ರಂದು ಉಚ್ಚ ನ್ಯಾಯಾಲಯದ ಏಕ ಸದಸ್ಯ ಪೀಠ ಕಲಂ 20ನ್ನು ಸ್ಥಗಿತಗೊಳಿಸಿರುವ ಕ್ರಮವು ಸರಿಯಿರುತ್ತದೆ ಎಂದು ಎತ್ತಿ ಹಿಡಿದಿದ್ದು, ಘನ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ದಿನಾಂಕ : 28–08–2012 ರಂದು ಕರ್ನಾಟಕ ಭೂಕಾಯಿದೆ

ಸೆಕ್ಷನ್ 23 ಮತ್ತು 24ರಡಿ (Land Acquisition Act Section 23 & 24) ಭೂ ಸ್ವಾಧೀನ ಪಡಿಸಿಕೊಂಡ ಭೂ ಮಾಲೀಕರಿಗೆ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯು ಪರಿಹಾರ ನೀಡುವಂತೆ ತೀರ್ಪು ನೀಡಿದೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ : 17–09–2012ರಂದು ಪ್ರಧಾನ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ನಡವಳಿಯಂತೆ ರಿಟ್ ಅಪೀಲ್ ಸಂಖ್ಯೆ : 918/2008 ಮತ್ತು 1484–1485/2011 (ಜಿಎಮ್–ಸ್ಲಮ್) (ಶ್ರೀ ಬಿ.ಆರ್. ಮುರಳೀಧರ ಮತ್ತು ಇತರರು) ರಲ್ಲಿ ದಿನಾಂಕ : 28–08–2012 ರಂದು ನೀಡಿದ ತೀರ್ಪಿನ ವಿರುದ್ಧ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಅಧಿನಿಯಮವನ್ನು ಸ್ಥಗಿತಗೊಳಿಸಿ (Struck down) ನೀಡಿದ ಸರ್ಕಾರವು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಾಯ್ದೆ ಕಲಂ 20ನ್ನು Restore ಮಾಡುವ ಬಗ್ಗೆ ಸರ್ವೋಚ್ಛ ನ್ಯಾಯಾಲಯದಲ್ಲಿ SLP ಫೈಲ್ ಮಾಡಲು ನಿರ್ಣಯ ಕೈಗೊಳ್ಳಲಾಯಿತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ : 17–09–2012 ರಂದು ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಯನ್ವಯ ಘನ ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರುರವರು ನೀಡಿರುವ ತೀರ್ಪಿನ ವಿರುದ್ಧ ಭಾರತದ ಸರ್ವೋಚ್ಛ ನ್ಯಾಯಾಲಯದಲ್ಲಿ SLP ಫೈಲ್ ಮಾಡಲು ಶ್ರೀ ವಿ.ಎನ್. ರಘುಪತಿ, ಸರ್ಕಾರಿ ವಕೀಲರು ಇವರನ್ನು ನೇಮಕ ಮಾಡಿ ಕಾನೂನು ಕೋಶದ ಮುಖ್ಯಸ್ಥರು ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ, ವಸತಿ ನಗರಾಭಿವೃದ್ಧಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆರವರು ಸೂಚಿಸಿರುವಂತೆ ಸದರಿ ಪ್ರಕರಣದಲ್ಲಿ ಆದೇಶ ಹೊರಡಿಸಲಾಗಿದೆ ಹಾಗೂ ಪೀಠಾಧಿಕಾರಿ–4, ವಸತಿ ಇಲಾಖೆರವರನ್ನು ವ್ಯಾಜ್ಯ ನಿರ್ವಹಣೆ ಹಾಗೂ ಶಪಥೀಕರಿಸುವ ಅಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರ ದಿನಾಂಕ : 27–09–2012ರಲ್ಲಿ ಸದರಿ ಪ್ರಕರಣದಲ್ಲಿ, ಕರ್ನಾಟಕ ಉಚ್ಛ ನ್ಯಾಯಾಲಯದ ಸರ್ಕಾರಿ ವಕೀಲರನ್ನು ಹಾಗೂ ಸರ್ವೋಚ್ಛ ನ್ಯಾಯಾಲಯ, ನವದೆಹಲಿಯ ಸಂಬಂಧಪಟ್ಟ ಸರ್ಕಾರಿ ವಕೀಲರಾದ ಶ್ರೀ ವಿ.ಎನ್. ರಘುಪತಿ ಹಾಗೂ ಇತರರೊಡನೆ ವ್ಯವಹರಿಸಲು ಸದರಿ ಪ್ರಕರಣದಲ್ಲಿಯ ಮಾಹಿತಿಯನ್ನು ಬಲ್ಲವರಾಗಿದ್ದು, ಹಾಗೂ ನುರಿತಂತಹವರು ಮತ್ತು ಸದರಿ ಪ್ರಕರಣವನ್ನು ಸಮರ್ಥನೀಯವಾಗಿ ನಿಭಾಯಿಸಬೇಕಾಗಿರುವ ಹಿನ್ನೆಲೆಯಲ್ಲಿ ಸರ್ಕಾರದ ಪರವಾಗಿ (ಪೀಠಾಧಿಕಾರಿ–4, ವಸತಿ ಇಲಾಖೆ), ಲಿಟಿಗೇಷನ್ ಆಫೀಸರ್ ಆಗಿ ಶ್ರೀ ಎನ್.ಎಸ್. ರಾಯಪ್ಪ, ಕಾನೂನು ಅಧಿಕಾರಿ, ಗ್ರೇಡ್–2, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರನ್ನು ನೇಮಕ ಮಾಡಲು ತೀರ್ಮಾನಿಸಿದೆ. ಶ್ರೀಯುತರಿಗೆ ದೆಹಲಿಗೆ ಪ್ರಯಾಣ ಮಾಡಲು ತಗಲುವ ವೆಚ್ಚ ಹಾಗೂ ಸರ್ವೋಚ್ಛ ನ್ಯಾಯಾಲಯದ ಪ್ರಕರಣದಲ್ಲಿ ಸಲ್ಲಿಸಬೇಕಾಗಿರುವ ದಾಖಲೆಗಳನ್ನು ಆಂಗ್ಲ ಭಾಷೆಗೆ ತರ್ಜುಮೆ ಮಾಡುವ ಮತ್ತಿತರ ವೆಚ್ಚಗಳನ್ನು, ನಿಯಮಾನುಸಾರ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ವತಿಯಿಂದ ಭರಿಸಲು ಸಹ ಅನುಮತಿ ನೀಡಲು ನಿರ್ಧರಿಸದೆ. ಅದಲ್ಲದೇ ಪ್ರಕರಣದಲ್ಲಿ ನೇಮಕವಾದ ಸರ್ಕಾರಿ ವಕೀಲರಿಗೆ ಬೇಕಾಗುವ ಎಲ್ಲಾ ಮಾಹಿತಿಯನ್ನು/ದಾಖಲೆಗಳನ್ನು ನೀಡಲು ಶ್ರೀ ಎನ್.ಎಸ್. ರಾಯಪ್ಪ, ಕಾನೂನು ಅಧಿಕಾರಿ, ಗ್ರೇಡ್–2, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರನ್ನು ನೇಮಿಸಲು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ವಇ 47 ಕೊಮಂಇ 2012, ಬೆಂಗಳೂರು, ದಿನಾಂಕ : 05–12–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು ರಿಟ್ ಅಪೀಲ್ ಸಂಖ್ಯೆ : 918/2008 ಮತ್ತು 1484–1485/2011 (ಜಿಎಮ್–ಸ್ಲಮ್)ದಲ್ಲಿ ಘನ ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು, ದಿನಾಂಕ : 28–08–2012ರಂದು ನೀಡಿದ ತೀರ್ಪಿನ ವಿರುದ್ಧ ಭಾರತದ ಸರ್ವೋಚ್ಛ ನ್ಯಾಯಾಲಯ, ನವದೆಹಲಿ ಇಲ್ಲಿ ಎಸ್.ಎಲ್.ಪಿ. (SLP) ಸಲ್ಲಿಸುವ ಸಂಬಂಧವಾಗಿ ಕರ್ನಾಟಕ ಉಚ್ಛ ನ್ಯಾಯಾಲಯದ ಸರ್ಕಾರಿ ವಕೀಲರನ್ನು ಹಾಗೂ ಸರ್ವೋಚ್ಛ ನ್ಯಾಯಾಲಯ, ನವದೆಹಲಿಯ ಸಂಬಂಧಪಟ್ಟ ಸರ್ಕಾರಿ ವಕೀಲರಾದ ಶ್ರೀ ವಿ.ಎನ್. ರಘುಪತಿ ಹಾಗೂ ಇತರೊಡನೆ ವ್ಯವಹರಿಸಲು ಸದರಿ ಪ್ರಕರಣದಲ್ಲಿ ನುರಿತಂಥ ಮತ್ತು ಸಮರ್ಥನೀಯವಾಗಿ ನಿಭಾಯಿಸುವಂತವರಾದ ಶ್ರೀ ಎನ್.ಎಸ್. ರಾಯಪ್ಪ, ಕಾನೂನು ಅಧಿಕಾರಿ, ಗ್ರೇಡ್–2, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರನ್ನು ಸರ್ಕಾರದ ಪರವಾಗಿ (ಪೀಠಾಧಿಕಾರಿ–4, ವಸತಿ ಇಲಾಖೆ) ಲಿಟಿಗೇಷನ್ ಆಫೀಸರ್ ಆಗಿ ನೇಮಕ ಮಾಡಲಾಗಿದೆ.

ಶ್ರೀ ಎನ್.ಎಸ್. ರಾಯಪ್ಪ, ಕಾನೂನು ಅಧಿಕಾರಿ, ಗ್ರೇಡ್–2, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರು ಸದರಿ ಪ್ರಕರಣದಲ್ಲಿ ದೆಹಲಿಗೆ ವಿಮಾನದ ಮೂಲಕ ಪ್ರಯಾಣ ಮಾಡಲು ನಿಯಮಾನುಸಾರ ಪ್ರಯಾಣ ಭತ್ಯೆ, ದಿನಭತ್ಯೆ ಮತ್ತು ಸದರಿ ಪ್ರಕರಣದಲ್ಲಿ ಸರ್ವೋಚ್ಛ ನ್ಯಾಯಾಲಯಕ್ಕೆ ನೀಡಬೇಕಾದ ದಾಖಲೆಗಳನ್ನು ಕನ್ನಡ ಭಾಷೆಯಿಂದ ಆಂಗ್ಲ ಭಾಷೆಗೆ ತರ್ಜುಮೆ ಮಾಡುವ ಮತ್ತಿತರ ಖರ್ಚು ವೆಚ್ಚಗಳನ್ನು ನಿಯಮಾನುಸಾರ ಮಂಡಳಿ ವತಿಯಿಂದ ಭರಿಸಲು ಸಹ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗಣ್ಣ**

ಪೀಠಾಧಿಕಾರಿ–4,

ವಸತಿ ಇಲಾಖೆ.

**P.R. 714**

**SC - 100**

## ವಸತಿ ಸಚಿವಾಲಯ

**ವಿಷಯ** : 2012–13ನೇ ಸಾಲಿನಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ವಇ 29 ಕೊಮಂಲೆ 2012, ದಿನಾಂಕ : 21–06–2012 & 14–09–2012
2. ಸರ್ಕಾರದ ಆದೇಶ ಸಂಖ್ಯೆ : ವಇ 15 ಕೊಮಂಲೆ 2012, ದಿನಾಂಕ : 11–06–2012.
3. ಆಯುಕ್ತರು ಕ.ಕೊ.ಅ.ಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊಅಮ:ಲೆಪಶಾ:ಅನುದಾನ: 2012–2013, ದಿನಾಂಕ : 20–10–2012.
4. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ : 4 : ಟಿಎಫ್‌ಪಿ : 2012, ಬೆಂಗಳೂರು, ದಿನಾಂಕ : 27–04–2012.
5. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ:8:ಟಿಎಫ್‌ಪಿ 2012, ಬೆಂಗಳೂರು, ದಿನಾಂಕ : 04–10–2012

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶಗಳಲ್ಲಿ 2012–13ನೇ ಸಾಲಿನ ಮೊದಲನೇ ಹಾಗೂ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 746.34 ಲಕ್ಷಗಳು ಕೊಳಚೆ ಸುಧಾರಣೆ–ಸಹಾಯಧನ–ಯೋಜನೆಯಡಿ ರೂ. 1976.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ–ಯೋಜನೇತರಡಿಯಲ್ಲಿ ರೂ. 638.61 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ.2221.00 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 1109.95 ಲಕ್ಷಗಳು ಒಟ್ಟು ರೂ. 3330.95 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ JnNURM-BSUP ಯೋಜನೆಯಡಿ ಪ್ರಾರಂಭಿಸದೇ ಇರುವ 4742 ಮನೆಗಳಿಗೆ ಹೆಚ್ಚುವರಿ ಅನುದಾನಗಳ ಪೈಕಿ ವಸತಿ ಇಲಾಖೆಯ ಶೇಕಡ 50ರಷ್ಟು ಅನುದಾನ ರೂ. 1804.00 ಲಕ್ಷಗಳನ್ನು ಕೊಳಚೆ ಸುಧಾರಣೆ–ಸಹಾಯಧನ–ಯೋಜನೆಯಡಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ರವರ ಪತ್ರದಲ್ಲಿ 2012–13ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 373.17 ಲಕ್ಷಗಳು, ಕೊಳಚೆ ಸುಧಾರಣೆ–ಸಹಾಯಧನ–ಯೋಜನೆಯಡಿ ರೂ. 1875.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ–ಯೋಜನೇತರಡಿಯಲ್ಲಿ ರೂ. 308.26 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 2012.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 543.93 ಲಕ್ಷಗಳು ಒಟ್ಟು ರೂ. 2556.43 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ಮತ್ತು (5) ರ ಆರ್ಥಿಕ ಇಲಾಖೆಯ ಆದೇಶಗಳಲ್ಲಿ ಸಿಬ್ಬಂದಿ ವೆಚ್ಚಗಳಿಗೆ ಆಯವ್ಯಯದಲ್ಲಿ ಒದಗಿಸಲಾದ ಮೊತ್ತದವರೆಗೆ ಆರ್ಥಿಕ ಇಲಾಖೆಯ ಅನುಮತಿ ಇದೆಯೆಂದು ಭಾವಿಸಿ ಹಣವನ್ನು ಬಿಡುಗಡೆ ಮಾಡಬಹುದಾಗಿದೆ. ಹಾಗೂ ರೂ. 5.00 ಕೋಟಿ ಮತ್ತು ಮೇಲ್ಪಟ್ಟು ಆಯವ್ಯಯದಲ್ಲಿ ಅವಕಾಶವಿರುವ ಇತರೆ ಎಲ್ಲಾ ಯೋಜನೆಗಳಿಗೆ ಪ್ರಸಕ್ತ ಆಯವ್ಯಯದ ಮೊದಲ ಒಂಬತ್ತು ಮಾಹೆಯ ಅನುದಾನವನ್ನು ಬಿಡುಗಡೆ ಮಾಡಬಹುದಾಗಿದೆ ಹಾಗೂ ಆಯವ್ಯಯದಲ್ಲಿ ಹಣದ ಲಭ್ಯತೆಗೆ ಒಳಪಟ್ಟು ಸಾಲಗಳ ನಿಬಂಧನೆಗಳು ಮತ್ತು ಷರತ್ತುಗಳಿಗೆ ಅನುಗುಣವಾಗಿ ಸಾಲ ಪಾವತಿಗಾಗಿ ಹಣವನ್ನು ಒಂದು ಆರ್ಥಿಕ ವರ್ಷದ 3ನೇ ತ್ರೈಮಾಸಿಕದವರೆಗೂ ಆರ್ಥಿಕ ಇಲಾಖೆಯ ಅನುಮತಿ ಇದೆಯೆಂದು ಭಾವಿಸಿ ಬಿಡುಗಡೆ ಮಾಡಬಹುದಾಗಿದೆ.

ಸರ್ಕಾರವು, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿ ಹಾಗೂ ಆರ್ಥಿಕ ಇಲಾಖೆಯ ಆದೇಶದನ್ವಯ ವಿವಿಧ ಲೆಕ್ಕಶೀರ್ಷಿಕೆಗಳಡಿ ಮೂರನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ :–

**ಸರ್ಕಾರದ ಆದೇಶ ಸಂಖ್ಯೆ : ವಇ 29 ಕೊಮಂಲೆ 2012, ಬೆಂಗಳೂರು, ದಿನಾಂಕ : 16–11–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ 2012–13ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ (ಯೋಜನೆ ಮತ್ತು ಯೋಜನೇತರ), ಕೊಳಚೆ ಸುಧಾರಣೆ–ಸಹಾಯಧನ (ಯೋಜನೆ), ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ (ಯೋಜನೇತರ) ಗಾಗಿ ಒಟ್ಟು ರೂ. 2556.43 ಲಕ್ಷಗಳು (ಇಪ್ಪತ್ತೈದು ಕೋಟಿ ಐವತ್ತಾರು ಲಕ್ಷದ ನಲವತ್ತ ಮೂರು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಈ ಅನುದಾನವನ್ನು ಕೆಳಕಂಡ ನಿಬಂಧನೆಗಳನ್ನು ಕಟ್ಟು ನಿಟ್ಟಾಗಿ ಪಾಲಿಸುವ ಷರತ್ತಿನೊಂದಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಮೂರನೇ ತ್ರೈಮಾಸಿಕ | | |
|---|---|---|---|---|
| | | ಯೋಜನೆ | ಯೋಜನೇತರ | ಒಟ್ಟು |
| 1. | ಸಿಬ್ಬಂದಿ ವೆಚ್ಚ<br>2217–04–191–2–01–101 | 137.50 | 235.67 | 373.17 |
| 2. | ಕೊಳಚೆ ಸುಧಾರಣೆ–ಸಹಾಯಧನ<br>2217–04–191–2–02–106 | 1875.00 | 0.00 | 1875.00 |
| 3. | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ<br>2217–04–191–2–04–240 | 0.00 | 308.26 | 308.26 |
| | **ಒಟ್ಟು** | **2012.50** | **543.93** | **2556.43** |

**ನಿಬಂಧನೆಗಳು :**

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕ ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

5. ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಎಫ್‌ಡಿ:4:ಟಿಎಫ್‌ಪಿ:2012, ದಿನಾಂಕ : 27–04–2012 ಹಾಗೂ ಸಂಖ್ಯೆ: ಎಫ್‌ಡಿ:8: ಟಿಎಫ್‌ಪಿ 2012, ಬೆಂಗಳೂರು, ದಿನಾಂಕ : 4–10–2012 ಆದೇಶಗಳಲ್ಲಿ ತಿಳಿಸಿರುವಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ : 4 : ಟಿಎಫ್‌ಪಿ : 2012, ದಿನಾಂಕ : 27–04–2012 ಹಾಗೂ ಸಂಖ್ಯೆ: ಎಫ್‌ಡಿ:8 :ಟಿಎಫ್‌ಪಿ 2012, ಬೆಂಗಳೂರು, ದಿನಾಂಕ : 04–10–2012 ಆದೇಶಗಳಲ್ಲಿ ಆರ್ಥಿಕ ಇಲಾಖೆಯವರು ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರ ಚಲಾಯಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗಣ್ಣ**

ಪೀಠಾಧಿಕಾರಿ–4,

ವಸತಿ ಇಲಾಖೆ.

**P.R. 715**

**SC – 250**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ಬನಶಂಕರಿ 6ನೇ ಹಂತದ ಬಡಾವಣೆಯ ಒಳಚರಂಡಿ ವ್ಯವಸ್ಥೆಗೆ ಕೊಳಚೆ ನೀರು ಸಂಗ್ರಹಣಾ ಬಾವಿಗಳು ಹಾಗೂ ಕೊಳಚೆ ನೀರು ಶುದ್ಧೀಕರಣ ಘಟಕಗಳ ನಿರ್ಮಾಣದ ಯೋಜನೆಗೆ ಮಂಜೂರಾತಿ ನೀಡಿ ಆಡಳಿತಾತ್ಮಕ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಬೆಂಅಪ್ರಾ/ವಿಭೂಸ್ವಾಅ/ಎ5/ಪಿಆರ್/69/2012–13 ದಿನಾಂಕ: 13.08.2012.

2. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಬೆಂಅಪ್ರಾ/ಆಯುಕ್ತರು/ದ.ವಿಭಾಗ/ಅಅ–1/ಆಸ/ಟಿ–412/2012–13 ದಿನಾಂಕ: 18.01.2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 13.08.2012ರ ಪತ್ರದಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರು ದಿನಾಂಕ 16.05.2012ರಂದು ನಡೆದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸಭೆಯ ವಿಷಯ ಸಂಖ್ಯೆ 95/12ರಲ್ಲಿ ಬನಶಂಕರಿ 6ನೇ ಹಂತ ಬಡಾವಣೆಯ ಒಳಚರಂಡಿ ವ್ಯವಸ್ಥೆಗೆ ಕೊಳಚೆ ನೀರು ಸಂಗ್ರಹಣಾ ಬಾವಿಗಳು ಹಾಗೂ ಕೊಳಚೆ ನೀರು ಶುದ್ಧೀಕರಣ ಘಟಕಗಳ ನಿರ್ಮಾಣಕ್ಕಾಗಿ ಒಳಪಡುವ ಕೆಂಗೇರಿ ಹೋಬಳಿ, ಹೆಮ್ಮಿಗೆಪುರ ಗ್ರಾಮದ ಸರ್ವೆ ನಂ. 50/1 ರ 0–10 ಗುಂಟೆ, 50/2 ರ 0–21 ಗುಂಟೆ, 51 ರ 3 ಎಕರೆ 09 ಗುಂಟೆ, 56/1 ರ 0–11 ಗುಂಟೆ, 56/2 ರ 0–04 ಗುಂಟೆ, 57/1 ರ 0–18 ಗುಂಟೆ, 57/8 ರ 0–06 ಗುಂಟೆ, 57/9 ರ 0–08 ಗುಂಟೆ, 57/10 ರ 0–13 ಗುಂಟೆ, 57/11 ರ 0–37 ಗುಂಟೆ, 57/12 ರ 0–22 ಗುಂಟೆ, 57/20 ರ 0–14 ಗುಂಟೆ, 57/21 ರ 0–11 ಗುಂಟೆ, 57/22 ರ 0–24 ಗುಂಟೆ 57/23 ರ 0–07 ಗುಂಟೆ, 57/24 ರ 0–13 ಗುಂಟೆ, 57/25 ರ 0–02 ಗುಂಟೆ ಒಟ್ಟು 10–00 ಎಕರೆ ಜಮೀನುಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಪ್ರಾಥಮಿಕ ಅಧಿಸೂಚನೆ ಸಂಖ್ಯೆ: ಬೆಂಅಪ್ರಾ/ವಿಭೂಸ್ವಾಅ/ಎ5/ಪಿಆರ್/186/2010–11 ದಿನಾಂಕ 05.05.2011 ರಲ್ಲಿ ಭೂಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ 11.08.2011ರಲ್ಲಿ ಪ್ರಕಟ ಪಡಿಸಲಾಗಿದೆಯೆಂದು ಹಾಗೂ ಈ ಕಾಮಗಾರಿಗೆ ಭೂಸ್ವಾಧೀನವನ್ನೊಳಗೊಂಡಂತೆ ತಗಲುವ ವೆಚ್ಚವನ್ನು ಪ್ರಾಧಿಕಾರವು ಭರಿಸುತ್ತಿರುವುದಾಗಿ ತಿಳಿಸಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ 1976 ಕಲಂ 19(1)ರಡಿಯಲ್ಲಿ ಅಂತಿಮ ಅಧಿಸೂಚನೆ ಹೊರಡಿಸಲು ಹಾಗೂ ಸದರಿ ನಿಯಮದ ಕಾಯ್ದೆ 18(3)ರನ್ವಯ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 371 ಬೆಂಅಸೇ 2012, ಬೆಂಗಳೂರು, ದಿನಾಂಕ: 10–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬನಶಂಕರಿ 6ನೇ ಹಂತ ಬಡಾವಣೆಯ ಒಳಚರಂಡಿ ವ್ಯವಸ್ಥೆಗೆ ಕೊಳಚೆ ನೀರು ಸಂಗ್ರಹಣಾ ಬಾವಿಗಳು ಹಾಗೂ ಕೊಳಚೆ ನೀರು ಶುದ್ಧೀಕರಣ ಘಟಕಗಳ ನಿರ್ಮಾಣಕ್ಕಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಹೆಮ್ಮಿಗೆಪುರ ಗ್ರಾಮದ ಸರ್ವೆ ನಂ. 50/1 ರ 0–10 ಗುಂಟೆ, 50/2 ರ 0–21 ಗುಂಟೆ, 51 ರ 3 ಎಕರೆ 09 ಗುಂಟೆ, 56/1 ರ 0–11 ಗುಂಟೆ, 56/2 ರ 0–04 ಗುಂಟೆ, 57/1 ರ 0–18 ಗುಂಟೆ, 57/8 ರ 0–06 ಗುಂಟೆ, 57/9 ರ 0–08 ಗುಂಟೆ, 57/10 ರ 0–13 ಗುಂಟೆ, 57/11 ರ 0–37 ಗುಂಟೆ, 57/12 ರ 0–22 ಗುಂಟೆ, 57/20ರ 0–14 ಗುಂಟೆ, 57/21 ರ 0–11 ಗುಂಟೆ, 57/22 ರ 0–24 ಗುಂಟೆ 57/23 ರ 0–07 ಗುಂಟೆ, 57/24 ರ 0–13 ಗುಂಟೆ, 57/25 ರ 0–02 ಗುಂಟೆ ಒಟ್ಟು 10–00 ಎಕರೆ ಜಮೀನುಗಳನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ 1976 ಕಲಂ 18(3) ರನ್ವಯ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

ಸದರಿ ಕಾಮಗಾರಿಯ ವೆಚ್ಚವನ್ನು ಪ್ರಾಧಿಕಾರದ ಸಂಪನ್ಮೂಲಗಳಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಚಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

**P.R. 716**

**SC – 700**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು